# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 268

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 22.09.2020

ಉತ್ತರಿಸುವ ಸಚಿವರು : ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮಂಡ್ಯ ಜಿಲ್ಲೆಯಲ್ಲಿ ಕೋವಿಡ್-19ರ ಲಾಕ್ ಡೌನ್ ಅವಧಿಯಲ್ಲಿ ಬಡವರಿಗೆ, ನಿರ್ಗತಿಕರಿಗೆ ಫುಡ್ ಕಿಟ್ ನೀಡಲಾಗಿದೆಯೇ; ನೀಡಿದ್ದಲ್ಲಿ, ಎಷ್ಟು ಫುಡ್ ಕಿಟ್ ಗಳನ್ನು ವಿತರಣೆ ಮಾಡಲಾಗಿದೆ; | ಆಹಾರ ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ ಇಲಾಖೆ ವತಿಯಿಂದ ಮಂಡ್ಯ ಜಿಲ್ಲೆಯಲ್ಲಿ ಲಾಕ್ ಡೌನ್ ಸಮಯದಲ್ಲಿ ಫುಡ್ ಕಿಟ್ ವಿತರಣೆ ಮಾಡಿರುವುದಿಲ್ಲ. |
| ಆ | ಕೋವಿಡ್-19ರ ಲಾಕ್ ಡೌನ್ ಅವಧಿಯಲ್ಲಿ ಬಡವರ ಹಸಿವು ನೀಗಿಸಲು ಇಲಾಖೆ ವತಿಯಿಂದ ತೆಗೆದುಕೊಂಡ ಮುಂಜಾಗ್ರತಾ ಕ್ರಮಗಳೇನು; | ಆಹಾರ ಭದ್ರತೆ ಕಾಯ್ದೆಯಡಿ ಅಂತ್ಯೋದಯ ಹಾಗೂ ಆದ್ಯತಾ ಪಡಿತರ ಚೀಟಿದಾರರಿಗೆ ಆಹಾರ ಧಾನ್ಯಗಳನ್ನು ವಿತರಿಸುವುದರ ಜೊತೆಗೆ ಕೋವಿಡ್-19 ಸಂದರ್ಭದಲ್ಲಿ ಕೇಂದ್ರ ಸರ್ಕಾರದ ಪ್ರಧಾನ ಮಂತ್ರಿ ಗರೀಬ್ ಕಲ್ಯಾಣ್ ಅನ್ನ ಯೋಜನೆಯಡಿ ಹಾಗೂ ಆತ್ಮ ನಿರ್ಭರ್ ಯೋಜನೆಯಡಿ ಪಡಿತರ ವಿತರಣೆ ಮಾಡಲಾಗಿರುತ್ತದೆ.<br>ಕೇಂದ್ರ ಸರ್ಕಾರದ ಪಿಎಂಜಿಕೆವೈ ಯೋಜನೆಯಡಿಯಲ್ಲಿ ಏಪ್ರಿಲ್ 2020ರ ಮಾಹೆಯಿಂದ ನವೆಂಬರ್ ಮಾಹೆಯವರೆಗೆ ಪ್ರತಿ ತಿಂಗಳು ಪ್ರತಿ ಎಎವೈ ಮತ್ತು ಪಿಹೆಚ್ ಹೆಚ್ ಫಲಾನುಭವಿಗೆ 5 ಕೆ.ಜಿ ಅಕ್ಕಿಯನ್ನು ವಿತರಿಸಲಾಗಿದೆ ಹಾಗೂ ಪ್ರತಿ ಎಎವೈ ಮತ್ತು ಪಿಹೆಚ್ ಹೆಚ್ ಪಡಿತರ ಚೀಟಿಗೆ 2020ರ ಏಪ್ರಿಲ್ ನಿಂದ ಜೂನ್ ವರೆಗೆ 1 ಕೆ.ಜಿ ತೊಗರಿಬೇಳೆಯನ್ನು ವಿತರಿಸಲಾಗಿದೆ. ಹಾಗೂ ಜುಲೈ ನಿಂದ ನವೆಂಬರ್ ವರೆಗೆ 1 ಕೆ.ಜಿ ಕಡಲೆಕಾಳನ್ನು ವಿತರಿಸಲಾಗುತ್ತಿದೆ.<br>ಆತ್ಮ ನಿರ್ಭರ್ ಭಾರತ್ ಯೋಜನೆಯಡಿ ಮೇ ಮತ್ತು ಜೂನ್ ಎರಡು ಮಾಹೆಗಳಿಗೆ ವಲಸಿಗ ಪ್ರತಿ ಫಲಾನುಭವಿಗೆ 5 ಕೆ.ಜಿ ಅಕ್ಕಿ ಮತ್ತು 1 ಕೆ.ಜಿ ಕಡಲೆಕಾಳಿನಂತೆ ಉಚಿತವಾಗಿ ವಿತರಣೆ ಮಾಡಲಾಗಿರುತ್ತದೆ.<br>ರಾಜ್ಯ ಸರ್ಕಾರದ ವತಿಯಿಂದ ವಿಲೇವಾರಿಗೆ ಬಾಕಿ ಇದ್ದ ಪಿಹೆಚ್ ಹೆಚ್ ಅರ್ಜಿಗಳ ಪ್ರತಿ ಅರ್ಜಿದಾರ ಕುಟುಂಬಕ್ಕೆ 10 ಕೆ.ಜಿ ಅಕ್ಕಿಯನ್ನು ಉಚಿತವಾಗಿ ಮತ್ತು ವಿಲೇವಾರಿಗೆ ಬಾಕಿ ಇದ್ದು, ಪಡಿತರ ಪಡೆಯಲು |

| | | |
|---|---|---|
| | | ಇಚ್ಛೆಯನ್ನು ವ್ಯಕ್ತಪಡಿಸಿದ ಎಪಿಎಲ್ ಅರ್ಜಿದಾರರಿಗೆ 10 ಕೆ.ಜಿ ಅಕ್ಕಿಯನ್ನು ಪ್ರತಿ ಕೆ.ಜಿಗೆ ರೂ.15/-ರ ದರದಲ್ಲಿ ಏಪ್ರಿಲ್ ಮಾಹೆಯಿಂದ ಮೂರು ಮಾಹೆಗಳು ವಿತರಣೆ ಮಾಡಲಾಗಿರುತ್ತದೆ.<br>ಪಡಿತರ ಪಡೆಯಲು ಇಚ್ಛೆಯನ್ನು ವ್ಯಕ್ತಪಡಿಸದಿರುವ ಎನ್.ಪಿ.ಹೆಚ್.ಹೆಚ್ ಪಡಿತರ ಚೀಟಿದಾರರ ಏಕ ಸದಸ್ಯ ಪಡಿತರ ಚೀಟಿಗೆ 5 ಕೆ.ಜಿ ಅಕ್ಕಿ ಮತ್ತು ಇಬ್ಬರಿಗಿಂತ ಹೆಚ್ಚಿನ ಸದಸ್ಯರಿರುವ ಪಡಿತರ ಚೀಟಿಗೆ 10 ಕೆ.ಜಿ ಅಕ್ಕಿಯನ್ನು ಪ್ರತಿ ಕೆ.ಜಿ ಗೆ ರೂ.15/- ರಂತೆ ಎರಡು ಮಾಹೆಗಳು ವಿತರಿಸಲಾಗಿರುತ್ತದೆ.<br>ಕೇಂದ್ರ ಸರ್ಕಾರದ ಉಜ್ವಲಾ ಯೋಜನೆಯಡಿ ಗ್ಯಾಸ್ ಫಲಾನುಭವಿಗಳಿಗೆ ಹಾಗೂ ಮುಖ್ಯ ಮಂತ್ರಿಗಳ ಅನಿಲಭಾಗ್ಯ ಯೋಜನೆಯ ಫಲಾನುಭವಿಗಳಿಗೆ ಮೂರು ತಿಂಗಳ ಉಚಿತ ಗ್ಯಾಸ್ ಸಿಲಿಂಡರ್ ಗಳನ್ನು ನೀಡಲಾಗಿರುತ್ತದೆ. |
| ಇ | ಕೋವಿಡ್-19ರ ಲಾಕ್ ಡೌನ್ ಅವಧಿಯಲ್ಲಿ ಸಾರ್ವಜನಿಕರು ಕೆಲಸ ಕಳೆದುಕೊಂಡು ಕೆಲಸ ಸಿಗದೆ ಪರದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ, ಈ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಲು ಸರ್ಕಾರ ಯಾವ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗುವುದು? (ಸ್ಪಷ್ಟ ಉತ್ತರ ನೀಡುವುದು) | ಅನ್ವಯಿಸುವುದಿಲ್ಲ. |

ಆನಾಸ 248 ಡಿಆರ್ ಎ 2020 (ಇ-ಆಫೀಸ್)

(ಕೆ.ಗೋಪಾಲಯ್ಯ)

ಆಹಾರ, ನಾಗರಿಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಹಾಗೂ

ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.